66

# ಜರಾಸಂಧ ವಧೆ



(ಏಕಾಂಕ ನಾಟಕ)

ರಚಯಿತರು:

ಶ್ರೀ| ಎ. ವಿ. ಮಯ್ಯ,

ಬಂಟ್ವಾಳ.

1955.




ಒಂದಾಣೆ ಮಾಲೆ

## ಒಂದಾಣೆ ಮಾಲೆಯಲ್ಲಿ
## ಈ ವರೆಗೆ ಪ್ರಕಟವಾದ ಪುಸ್ತಕಗಳ ವಿವರ ಹೀಗಿದೆ:

---

| | | |
|---|---|---|
| ೧. | ‡ಕೆಪ್ಪಟಿರಾಯ (ವಿನೋದ ಕಥೆ) | ದಿ। ಎಂ. ಎನ್. ಕಾಮತ್. |
| ೨. | ‡ನಾರೀಶ್ವರರು (ಏಕಾಂಕ ಪ್ರಹಸನ) | ಶ್ರೀ। ಕುಡ್ಪಿ ವಾಸುದೇವ ಶೆಣೈ. |
| ೩. | ‡ಕಳ್ಳನಿಗೆ ಸಂಭಾವನೆ ಮತ್ತು ಇತರ ಕಥೆಗಳು | ಶ್ರೀ। ಎಲ್. ಎಸ್. ನಾಯಕ. |
| ೪. | ‡ಸದ್ರಿ ಸುಬ್ಬ (ಏಕಾಂಕ ಪ್ರಹಸನ) | ದಿ। ಎಂ. ಎನ್ ಕಾಮತ್. |
| ೫. | ‡ಅದ್ಭುತ ತ್ಯಾಗ ಮತ್ತು ಇತರ ಕಥೆಗಳು | ವೈದ್ಯಗುರು ಎಂ. ಆರ್. ಭಟ್. |
| ೬. | ಚುನಾವಣೆ ಅರ್ಥಾತ್ ಬನಾವಣೆ (ಏಕಾಂಕ ಪ್ರಹಸನ) | ಕುಡ್ಪಿ ವಾಸುದೇವ ಶೆಣೈ. |
| ೭. | ‡'ಬೀಡಿ ಸೇದಬೇಡಿ' ಮತ್ತು 'ಆ ಮಗು' (ವಿನೋದ ಕಥೆಗಳು) | ದಿ। ಎಂ.ಎನ್. |
| ೮. | ‡ಇಂಗ್ಲಿಷ್-ಕನ್ನಡ ಅರ್ಥಕೋಶ (ಭಾರತ ಸಂವಿಧಾನದಿಂದ) | [ಕಾಮತ್. |
| ೯. | ‡ಲಂಚಕ್ಕೆ ಸಂಚಕಾರ | ಡಾ। ಎಸ್. ಪಿ. ಭಟ್. |
| ೧೦. | ‡ಟಿಶ್ಯೂ ಔಷಧಿಗಳ ಕೈಪಿಡಿ. | ಶ್ರೀ। ಪಿ. ಎಸ್. ವೆಂಕಟಕೃಷ್ಣರಾವ್. |
| ೧೧ | ಶ್ರೀಕ್ಷೇತ್ರ ಧರ್ಮಸ್ಥಳ (ತೃತೀಯ ಮುದ್ರಣ). | |
| ೧೨. | ಜೀವದ ಮೌಲ್ಯ ಮತ್ತು ಇತರ ಕಥೆಗಳು | ಶ್ರೀ। ಎಲ್. ಎಸ್. ನಾಯಕ. |
| ೧೩. | ಸತ್ತವನ ಸೇಡು ಮತ್ತು ಇತರ ಕಥೆಗಳು | ಡಾ। ವಿ. ಆರ್. ಭಟ್. |
| ೧೪. | "ವೆಂಕಟನ ಸಂಕಟ" (ಏಕಾಂಕ ಪ್ರಹಸನ) ಮತ್ತು ಎರಡು ಕಥೆಗಳು | |
| ೧೫. | ಬಾಬಿಗೆ ಬಾಸಿಂಗ (ಏಕಾಂಕ ಪ್ರಹಸನ) | ಶ್ರೀ। ಕುಡ್ಪಿ ವಾಸುದೇವ ಶೆಣೈ. |
| ೧೬. | ವೇಣೂರಿನ ಗತವೈಭವ | ದಿ। ಪಂಡಿತ ಲೋಕನಾಥ ಶಾಸ್ತ್ರಿಗಳು. |
| ೧೭. | ಒಗಟುಗಳು (ದ್ವಿತೀಯ ಮುದ್ರಣ) | ಶ್ರೀ। ಟಿ. ಚಂದ್ರರಾಜ ಸೆಟ್ಟಿ. |
| ೧೮. | ಜಗಳಗಂಟಿ ಮತ್ತು ಇತರ ಕಥೆಗಳು | ವೈದ್ಯಗುರು ಎಂ. ಆರ್. ಭಟ್. |
| ೧೯. | ರಥೋತ್ಸವ. | |
| ೨೦. | ಕರಿನಾಯಿ ಮತ್ತು ಮುಪ್ಪು | ದಿ। ಎಂ. ಎನ್. ಕಾಮತ್. |
| ೨೧. | ‡ಭಾರತದ ಮಹಾನಗರಗಳು (ಪ್ರಥಮ ಭಾಗ) | ಶ್ರೀ। ಟಿ. ಚಂದ್ರರಾಜ ಸೆಟ್ಟಿ. |
| ೨೨. | ‡ತಿರುಕ್ಕುರಲ್ | ಶ್ರೀ। ಡಿ. ಪುಟ್ಟಸ್ವಾಮಿ, ಎಡ್ವೊಕೇಟ್. |
| ೨೩. | ಸೂರ್ಯನ ಸಂಸಾರ ಮತ್ತು ಇತರ ಕಥೆಗಳು | ಶ್ರೀ। ಬಿ ಶಂಕರ ಭಟ್. |
| ೨೪. | ‡ಭಾರತದ ಮಹಾನಗರಗಳು (ದ್ವಿತೀಯ ಭಾಗ) | ಶ್ರೀ। ಟಿ. ಚಂದ್ರರಾಜ ಸೆಟ್ಟಿ. |
| ೨೫. | ಧೈರ್ಯ ಮತ್ತು ಇತರ ಸತ್ಯ ಕಥಾನಕಗಳು | ಶ್ರೀ। ಎಲ್. ಎಸ್. ನಾಯಕ. |
| ೨೬. | ‡ಮಾರಾವತಾರ (ಏಕಪಾತ್ರ ಯಕ್ಷಗಾನ ಪ್ರಬಂಧ) | ಶ್ರೀ। ಜಿ.ಆರ್.ಪಾಂಡೇಶ್ವರ. |
| ೨೭. | ಹಾಸವಿಲಾಸ (ಆರಿಸಿ ತೆಗೆದ ನಗೆಹನಿಗಳು) | ಶ್ರೀ। ಕುಡ್ಪಿ ವಾಸುದೇವ ಶೆಣೈ. |
| ೨೮. | ಸತ್ಯವಂತ ಬಾಬಿ [ಏಕಾಂಕ ಪ್ರಹಸನ] | ಶ್ರೀ। ಕುಡ್ಪಿ ವಾಸುದೇವ ಶೆಣೈ. |
| ೨೯. | ಜಾಣ್ಮೆಯ ಒಗಟುಗಳು | ಡಾ। ಎಸ್. ಪಿ. ಭಟ್. |
| ೩೦. | ಜಾತಕ ಕಥೆಗಳು | ಶ್ರೀ। ಎಂ. ಸುಬ್ರಾಯನ್. |
| ೩೧. | ಕಾರ್ಕಳದ ಚರಿತ್ರೆ | ಶ್ರೀ। ಡಿ. ಪುಟ್ಟಸ್ವಾಮಿ, ಎಡ್ವೊಕೇಟ್. |
| ೩೨. | ಮರ್ಜಿ [ಏಕಾಂಕ ಪ್ರಹಸನ] | ದಿ। ಎಂ. ಎನ್. ಕಾಮತ್. |
| ೩೩. | ದರ್ಶನದ ಕಥೆಗಳು | ಶ್ರೀ। ಬಿ ಶಂಕರ ಭಟ್ಟ ಮತ್ತು ಶ್ರೀ। ಬಿ.ಎಂ.ಶರ್ಮಾ. |

(17ನೇ ಪುಟಕ್ಕೆ ಮುಂದುವರಿದಿದೆ.)

# ಜರಾಸಂಧ ವಧೆ

## ಪಾತ್ರಗಳು:

ಪುರುಷರು:— ೧. ಶ್ರೀಕೃಷ್ಣ ೨. ನಾರದ ೩. ಧರ್ಮರಾಯ
೪. ಭೀಮ ೫. ಅರ್ಜುನ ೬. ಜರಾಸಂಧ
೭. ಬ್ರಾಹ್ಮಣರು ೮. ಚಾರಕರು

ಸ್ತ್ರೀಯರು:— ೧. ರುಕ್ಮಿಣಿ ೨. ಸತ್ಯಭಾಮೆ ೩. ಸೇವಕಿ

## ದೃಶ್ಯ ೧.

(ಬೀದಿ; ನಾರದನು ಹರಿನಾಮ ಕೀರ್ತನೆ ಗೈಯುತ್ತಾ ಪ್ರವೇಶಿಸುವನು.)

ನಾರದ: (ಸ್ವಗತ) ನಾರಾಯಣ. ಲೋಕಕ್ಕೆ ಮಂಗಳವಾಗಲಿ. ಸಕಲ ಸಜ್ಜನರಿಗೆ ಸದಾ ಸುಖ ಶಾಂತಿಗಳು ಲಭಿಸಲಿ. ಇಂದು ಪ್ರಪಂಚದಲ್ಲಿ ಎಲ್ಲಿ ನೋಡಿದರೂ ಅಸೂಯೆ, ಅಧರ್ಮ ಅಶಾಂತಿಗಳೇ ತಾಂಡವವಾಡುತ್ತಿವೆ, ಸ್ವಾರ್ಥ ಸಾಧಕರ ಕೈವಾಡದಿಂದಾಗಿ ಸಾಮಾನ್ಯ ಜನರಿಗೆ ಜೀವನವೇ ಕಷ್ಟಕರವಾಗಿ ಪರಿಣಮಿಸುತ್ತಿದೆ. ಪರಮಾತ್ಮನು ಕೃಷ್ಣಾವತಾರದಲ್ಲಿ ಜನನಕ್ಕೆ ಬಂದು, ತನ್ನ ಬಾಲ್ಯದಲ್ಲಿಯೇ, ಅನೇಕ ಅಧಮರನ್ನು ಅಂತಕನಲ್ಲಿಗೆ ಕಳುಹಿಸಿದರೂ ಇನ್ನೂ ಹಲವಾರು ಮಂದಿಗಳಿಗೆ ಅದರ ಅರಿವೇ ಆಗಿಲ್ಲ. ಅವರಲ್ಲಿ ಪ್ರಥಮ ಸ್ಥಾನ ಮಗಧ ದೇಶದ ದೊರೆಯಾದ ಜರಾಸಂಧನಿಗೇ ಸಲ್ಲಬೇಕು. ನರನಾಗಿ ಹುಟ್ಟಿ ಪಿಶಾಚಿಯಂತೆ ಆತನ ವರ್ತನೆಗಳು ಹದಮೀರಿ ಹೋಗಿವೆ. ಅವನ ವಧೆಗೆ ಬೇಕಾದ ಬೀಜವನ್ನು ಇಂದ್ರಪ್ರಸ್ಥದಲ್ಲಿ ಇಂದು ಬಿತ್ತಿರುತ್ತೇನೆ. ತಮ್ಮ ತಂದೆಯಾದ ಪಾಂಡುವಿಗೆ ಅಮರ ಲೋಕದಲ್ಲಿ ಅವರ ಹಿರಿಯರಾದ ನಳ ನಹುಷಾದಿ ರಾಜರುಗಳಿಗೆ ದೊರಕಿದ ಸ್ಥಾನ ಲಭಿಸದಿದ್ದು, ಅದನ್ನು ಆದಷ್ಟು ಬೇಗನೆ ದೊರಕಿಸಲು ಅಗತ್ಯವುಳ್ಳ ರಾಜಸೂಯ ಯಾಗವನ್ನು

ಜರಗಿಸಬೇಕೆಂಬ ಉಪಾಯವನ್ನು ಪಾಂಡವರಿಗೆ ಸೂಚಿಸಿ ಹೊರಟಿರವೆನು. ಧರ್ಮರಾಯನಂತೂ ಸಮ್ಮತಿಸಿದನೆಂದಾದ ಮೇಲೆ ಇನ್ನು ಜರಗುವುದರಲ್ಲಿ ಅನುಮಾನವಿಲ್ಲ. ಈ ನೆವನದಿಂದ ಶ್ರೀಕೃಷ್ಣ ಪರಮಾತ್ಮನಿಗೆ, ದುರುಳರಾದ ಮಾಗಧ-ಶಿಶುಪಾಲರ ವಧೆಗೆ ಹಾದಿಮಾಡಿ ಕೊಟ್ಟಂತಾಯಿತು; ಇರಲಿ. ನಡೆಯಲಿ ರಾಜಸೂಯಾಧ್ವರ! (ತೆರಳುವನು.)

## ದೃಶ್ಯ ೨.

(ದ್ವಾರಕೆಯಲ್ಲಿ ಶ್ರೀಕೃಷ್ಣನ ಅಂತಃಪುರ. ಕೃಷ್ಣನು ಮಡದಿಯರಾದ ರುಕ್ಮಿಣಿ, ಸತ್ಯಭಾಮೆಯರೊಂದಿಗೆ ಸರಸವಾಡುತ್ತಿರುವನು.)

ಸತ್ಯಭಾಮೆ: ಸ್ವಾಮಿ, ನಮ್ಮೊಡನೆ ಮಾತಾಡುತ್ತಿದ್ದಂತೆ ನಿಮ್ಮ ಮನಸ್ಸು ಅದೆಲ್ಲಿಗೋ ತಿರುಗಿದಂತೆ ತೋರುತ್ತಿದೆಯಲ್ಲ! ಯಾವ ಗಾಢಾಲೋಚನೆಗೆ ತೊಡಗಿದಿರಿ?

ಶ್ರೀಕೃಷ್ಣ: ಏನಿಲ್ಲ. ಇದ್ದರೂ, ನಿನ್ನೊಡನೆ ಹೇಳುವಷ್ಟು ಗಹನವಾದುದಂತೂ ಖಂಡಿತ ಇಲ್ಲ.

ರುಕ್ಮಿಣಿ: ಸಹೋದರಿ, ಇದೊಂದು ನಮಗೆ ಹೊಸತೇ? ಅಂದು ಇವರ ತಂಗಿಯ ವಿವಾಹದ ವಿಚಾರ ನಿನಗೆ ನೆನಪಿಲ್ಲವೇ?

ಸತ್ಯ: (ನಗುತ್ತ) ಅದನ್ನು ಈ ಜನ್ಮದಲ್ಲಿ ಮರೆಯುವುದೆಂತು? ದಿಬ್ಬಣದಲ್ಲಿ ಮದುಮಗನಾಗಿ ಬಂದವನಿಗೆ ದೊಣ್ಣೆ........ಗಡ್ಡ ಕಟ್ಟಿದ........ ಅಲ್ಲ........ಅಲ್ಲ........ಇವರೇ ಕಟ್ಟಿಸಿದ ಸನ್ಯಾಸಿಗೆ ಹೆಣ್ಣು. (ಎಲ್ಲರೂ ನಗುವರು.)

ಶ್ರೀಕೃಷ್ಣ: ಅದು ನಿಜ. ನಿಮಗೆ,—ಅಂದರೆ, ಲೋಕದ ಹೊರಗೆ ಏನು ನಡೆಯುತ್ತಿದೆ ಎಂದರಿಯದ ಮುಗ್ಧೆಯರಿಗೆ, ಆ ಕಥೆಯಿಂದ ತಿಳಿಯುವುದು ಅಷ್ಟೆ. ರುಕ್ಮಿಣೀ, ನಿನ್ನ ಕಲ್ಯಾಣದ ಕಥೆ ಹಾಗೇಕಾಯಿತು?

ರುಕ್ಮಿಣಿ: ಅದು ಆಗಿಹೋಯಿತು, ಅಷ್ಟೆ.

ಸತ್ಯ: ಇದೂ ಆಗಿಹೋಯಿತು, ಅಷ್ಟೆ ಅನ್ನಿ.

ಶ್ರೀಕೃಷ್ಣ: ಅಷ್ಟೆ. ಸತ್ಯ. ಅದೂ ಆಗಿಹೋದುದೇ, ಇದೂ ಆಗಿಹೋದುದೇ. ಆದರೆ, ಎರಡೂ ಕಥೆಗಳೂ ಸುಖಾಂತ್ಯವಾಗಿವೆಯಷ್ಟೆ?

ರುಕ್ಮಿಣಿ: ಹಾಂ, ಆಗಿವೆ. ಆದಿರಲಿ. ಈಗಿನ ಹೊಸ ಆಲೋಚನೆ ಯೇನು, ಸ್ವಾಮೀ?

ಶ್ರೀಕೃಷ್ಣ: ನಿಮಗೇಕೆ ಈ ವಿಷಯದಲ್ಲಿ ಹಟ?

ಸತ್ಯ: ಹಟವಲ್ಲ ಪ್ರಿಯ, ಕುತೂಹಲ.

ರುಕ್ಮಿಣಿ: ನೀವು ಏನಾದರೊಂದು ಆಲೋಚಿಸಿ ಹೊರಟರೆಂದಾದರೆ ಹಿಂದಿರುಗುವುದು ಅದೆಷ್ಟೋ ದಿನಗಳ ಮೇಲೆ. ಬಂದ ಮೇಲೆ ಅದು ಹಾಗೆ, ಇದು ಹೀಗೆ, ನಾನು ಹಾಗೆ ಮಾಡಿದೆ ಎಂದೆಲ್ಲ ಹೇಳ ತೊಡಗುವಿರಿ. ಅದಕ್ಕಾಗಿ ನಿಮ್ಮ ಗಮನಾಗಮನ ವಿಚಾರಗಳಲ್ಲಿ ಆಸಕ್ತಿಯುಳ್ಳವರಾದುದ ರಿಂದ ಕೇಳಬೇಕಾಗುತ್ತಿದೆ. ಅಷ್ಟೆ.

ಶ್ರೀಕೃಷ್ಣ: ರಮಣಿಯರೇ, ಹಾಗಾದರೆ ಕೇಳಿ, ಸುಭದ್ರಾಕಲ್ಯಾಣದ ಪ್ರಸಂಗದಷ್ಟು ರಹಸ್ಯವಾದುದಲ್ಲ.

ಸತ್ಯ: ಹಾಗಾದರೆ ಹೇಳಿ.

ಶ್ರೀಕೃಷ್ಣ: ಜಗತ್ತಿನಲ್ಲಿ ದುಷ್ಟರ ಹಾರಾಟ ಮಿತಿಮೀರುತ್ತಿದೆ. ಅದರಲ್ಲಿಯೂ ಮಗಧದೇಶದ ಜರಾಸಂಧ, ಚೈದ್ಯನೃಪಾಲನಾದ ಶಿಶುಪಾಲರೇ ಮೊದಲಾದವರ ಹಾವಳಿ ಬಲವಾಗಿದೆ.

ರುಕ್ಮಿಣಿ: ಯಾರು? ಜರಾಸಂಧನೇ? ಅವನಿಗಾಗಿಯೇ ನೀವು ದ್ವಾರಕೆಯ ನಿರ್ಮಾಣವೆಸಗಿದಿರಿ ಎಂದು ಎಂದೋ ಆಡಿದ ನುಡಿಯು ನೆನಪು ಬರುತ್ತಿದೆಯಲ್ಲ ಸ್ವಾಮೀ?

ಶ್ರೀಕೃಷ್ಣ: ನಿಜವಾದ ಸಂಗತಿಯದು. ಹಲವು ಬಾರಿ ನಮ್ಮಲ್ಲಿ ಕಾಳಗಕ್ಕೆ ಬಂದವನು ಅವನು. ಆ ಸನ್ನಿವೇಶಗಳಲ್ಲಿ ಕಾರಣಾಂತರಗಳಿಂದ ಸೋಲನ್ನು ಒಪ್ಪಬೇಕಾಯಿತು.

ಸತ್ಯ: ಕಾರಣವೇನು? ನೀವು ಅಷ್ಟು ಬಲಹೀನರೇ?

ಶ್ರೀಕೃಷ್ಣ: ಬಲಾಬಲದ ಪ್ರಶ್ನೆಯಲ್ಲ, ಸತ್ಯಭಾಮಾ. ಪ್ರಥಮ ಬಾರಿ ಸಮರಕ್ಕೆ ಬಂದಾಗಲೇ ಆತನನ್ನು ವಧಿಸುತ್ತಿದ್ದರೆ ಆತನ ಎಂಜಲನ್ನದಿಂದ ಕೊಬ್ಬಿದ್ದ ಆತನ ಅಸಂಖ್ಯಾತ ಅನುಯಾಯಿಗಳು ಹಾಗೆಯೇ ಉಳಿಯುತ್ತಿದ್ದರು. ಅದಕ್ಕಾಗಿ, ಬಂದ ಸೈನಿಕರನ್ನೆಲ್ಲಾ ಕ್ಷೆಮಿಸಿ ಯಾತ್ರೆಗೆ ಕಳುಹಿಸಿ, ಆ ಮೇಲೆ ಆ ದುಷ್ಟನ ಸಂಹಾರವಾಗಬೇಕೆಂದು ನಾವು ಹೂಡಿದ ಹಂಚಿಕೆ. ಅಲ್ಲದೆ, ಅವನನ್ನು ಕೊಲ್ಲುವವನು ನಾನಲ್ಲ.

ಸತ್ಯ: ಮತ್ತಾರ ಬಾಯಿಗೆ ಬೀಳಬೇಕಾದ ಪಶು ಸ್ವಾಮಿ, ಅದು?

ಶ್ರೀಕೃಷ್ಣ: ಇದ್ದಾನೆ, ಒಬ್ಬ ಇದ್ದಾನೆ. ಪಾಂಡವರಲ್ಲಿ ಎರಡನೆ ಯವನಾದ ಭೀಮಸೇನನಿಂದ ಆತನನ್ನು ಕೊಲ್ಲಿಸಬೇಕಾಗಿದೆ.

(ಅಷ್ಟರಲ್ಲಿ ಸೇವಕಿಯೋರ್ವಳು ಪ್ರವೇಶಿಸುವಳು.)

ಸೇವಕಿ: ದೇವರೇ, ಇಂದ್ರಪ್ರಸ್ಥದಿಂದ ಓರ್ವನು ಬಂದು ತಮ್ಮ ದರ್ಶನಕ್ಕಾಗಿ ಕಾಯುತ್ತಿರುವನು.

ಶ್ರೀಕೃಷ್ಣ: ಇಂದ್ರಪ್ರಸ್ಥದಿಂದಲೇ? ಎಲ್ಲಿ? ಬರಹೇಳು.

(ಸೇವಕಿಯು ತಲೆ ಅಲ್ಲಾಡಿಸಿ ತೆರಳುವಳು. ಚಾರಕನು ಪ್ರವೇಶಿಸಿ ಕಾಣಿಕೆಗಳನ್ನು ಕೃಷ್ಣನಿಗರ್ಪಿಸುವನು. ರುಕ್ಮಿಣಿ, ಸತ್ಯಭಾಮೆಯರು ದೂರ ಸರಿದು ನಿಲ್ಲುವರು.)

ಚಾರಕ: ದೇವರಿಗೆ ವಂದಿಸಿರುವೆನು.

ಶ್ರೀಕೃಷ್ಣ: ಇದಾರು? ಇಂದ್ರಸೇನ, ಏಳು, ಇದೇನು?

ಚಾರಕ: ಸ್ವಾಮಿ, ಪಾಂಡವರು ತಮಗೆ ಕಳುಹಿಸಿದ ಕಾಣಿಕೆ, ಸ್ವೀಕರಿಸಬೇಕು.

ಶ್ರೀಕೃಷ್ಣ: ಸಂತೋಷ. ಪಾಂಡವರೆಲ್ಲರೂ ಕ್ಷೇಮವಷ್ಟೆ?

ಚಾರಕ: ತಮ್ಮ ದಯೆಯಿಂದ ಸುಕ್ಷೇಮಿಗಳು.

ಶ್ರೀಕೃಷ್ಣ: ಆಗಲಿ. ಬಂದ ಕಾರಣವೇನು?

ಚಾರಕ: ದೇವರೇ, ಇಂದ್ರಪ್ರಸ್ಥಕ್ಕೆ ನಾರದರ ಸವಾರಿಯಾಗಿತ್ತು. ನಾರದರೂ ನನ್ನೊಡೆಯರುಗಳೂ ತುಂಬ ಮಾತಾಡಿಕೊಂಡು, ಕೊನೆಗೆ ನನ್ನನ್ನು ಇಲ್ಲಿಯ ವರೆಗೆ ಓಡಿಸಿದರು ಪರಾಕೆ.

ಶ್ರೀಕೃಷ್ಣ: ವಿಷಯವೇನು?

ಚಾರಕ: ವಿಷಯದ ವಿಚಾರದ ಅರಿವು ನನಗಿಲ್ಲ. ತಮ್ಮ ಸವಾರಿಯೊಮ್ಮೆ ಇಂದ್ರಪ್ರಸ್ಥದ ವರೆಗಾಗಬೇಕಂತೆ.

ಶ್ರೀಕೃಷ್ಣ: ಸರಿ. ಪಾಂಡವರಿಂದ ಕರೆ ಬಂದ ಮೇಲೆ ತಡವಿಲ್ಲ. ಈಗಲೇ ಹೊರಡುವ ಸಿದ್ಧತೆಯೆಸಗುವೆನು. (ಇಂದ್ರಸೇನನು ತೆರಳುವನು.) ರುಕ್ಮಿಣಿ, ಸತ್ಯಭಾಮಾ, ಜರಾಸಂಧ, ಶಿಶುಪಾಲಾದಿಗಳ ವಧೆಯ ನಾಟಕದ ಪೀಠಿಕೆಯನ್ನು ನಾರದರು ಪೂರೈಸಿದಂತೆ ಭಾಸವಾಗುತ್ತಿದೆ. ಇದೀಗಲೇ

ಇಂದ್ರಪ್ರಸ್ಥಕ್ಕೆ ತೆರಳಿ ಆದಷ್ಟು ಬೇಗನೆ ಕಾರ್ಯಸಾಧಿಸಿಕೊಂಡು ಹಿಂತಿರುಗಲಿರುವೆನು.

ರುಕ್ಮಿಣಿ-ಸತ್ಯ: ನಿಮ್ಮ ಕಾರ್ಯದಲ್ಲಿ ನಿಮಗೆ ಜಯವುಂಟಾಗಲಿ.

(ತೆರಳುವರು. ಪರದೆ ಬೀಳುವುದು.)

## ದೃಶ್ಯ ೩.

(ಬೀದಿ—ಚಾರಕನ ಪ್ರವೇಶ.)

ಚಾರಕ: (ಸ್ವಗತ) ಏನು ಸೋಜಿಗವಿದು? ಭಗವಂತನು ಇಷ್ಟು ಸುಲಭನೇ? ಒಬ್ಬ ಸಾಮಾನ್ಯ ಧನಿಕನ ನೆರವು ಸಿಗಬೇಕಿದ್ದರೆ ನೂರಾರು ಸಲ ಆತನ ಮನೆಬಾಗಿಲಲ್ಲಿ ಓಡಾಡಬೇಕಾಗುತ್ತದೆ. ಓಡಿಯೂ ನಿಷ್ಪ್ರಯೋಜನವಾಗುವುದಿದೆ. ಭಗವಂತನು ಹಾಗಲ್ಲ. ಲಕ್ಷ್ಮಿದೇವಿಯೇ ಆತನ ಹೆಂಡತಿ. ಇಡೀ ಜಗತ್ತನ್ನೇ ಸುಡಬಲ್ಲ ಶಕ್ತಿ ಆತನಿಗಿದೆಯಂತೆ. ಎಲ್ಲ ಜೀವರಾಶಿಗಳನ್ನು ಆತನು ಕುಣಿಸುವವನಂತೆ. ಆದರೂ ಪಾಂಡವರು ಆತನನ್ನೇ ಕುಣಿಸುತ್ತಿರುವರಲ್ಲ! ತನ್ನ ಅಣ್ಣನ ಮಾತನ್ನೂ ಮೀರಿ ಅರ್ಜುನನಿಗೆ ಸೋದರಿಯನ್ನಿತ್ತು, ಯೋಗ್ಯವಾದುದನ್ನೆ ಮಾಡಿದರು. ಆ ಯಾವುದೋ ಕಾಡಿಗೆ ಬೆಂಕಿ ಬಿದ್ದಾಗಲೂ ಅವರೇ ಬಂದು ಅರ್ಜುನನಿಗೆ ಸಹಾಯ ಮಾಡಿ ಹೋದರು. ಕೆಲವು ದಿನಗಳ ಹಿಂದೆ ಬಂದಿದ್ದ ಮಯನೂ ಸ್ವಾಮಿಯ ಆಜ್ಞೆಯಂತೆ ಮಂಟಪ ತಂದಿದ್ದೇನೆ ಅಂದಿದ್ದಾನೆ. ಇವೆಲ್ಲ ವಿಷಯಗಳಲ್ಲಿ ಕೃಷ್ಣನ ಸಹಾಯವೆಂದರೆ ವರ್ಣಿಸಲಃ ಅಸಾಧ್ಯವಾದುದು. ನಾನು ದ್ವಾರಕೆಗೆ ಹೊರಡುವಾಗ ಕೃಷ್ಣಸ್ವಾಮಿಯನ್ನು ಕರೆತರಲು ಎಷ್ಟು ಕಷ್ಟವಾಗಬಹುದೋ ಎಂದು ಭಾವಿಸಿದ್ದೆ. ಆದರೆ, ಅಲ್ಲಿಗೆ ಹೋದಾಗ ದೇವರು ಎಷ್ಟೊಂದು ವಿನಯದಿಂದ ಮಾತಾಡಿಸಿ ನನ್ನನ್ನು ಕಳುಹಿಸಿದರು! ನನ್ನಂತಹ ಸಾಮಾನ್ಯನ ಉಪಚಾರದ ವಿಷಯದಲ್ಲೂ ಎಷ್ಟೊಂದು ಆಸಕ್ತಿ ವಹಿಸಿದರು! ಯಜಮಾನರ ಕರೆಯನ್ನು ತಿಳಿದೊಡನೆ ಎಷ್ಟೊಂದು ಪ್ರೀತಿಯಿಂದ ಗರೂಡಾರೂಢರಾಗಿ ಹೊರಟರು! ಇದೆಲ್ಲವನ್ನು ನೋಡುವಾಗ ತುಳುಕುವುದು ತುಂಬಿದ ಕೊಡವಲ್ಲವೆಂಬುದು ನಿಜ. ಇರಲಿ. ಸ್ವಾಮಿಯವರು ಬರುವ ಮೊದಲೇ ನಾನು ಅರಸರಿಗೆ ಅರುಹಬೇಕು. (ತೆರಳುವನು.)

## ದೃಶ್ಯ ೪.

(ಧರ್ಮಜನ ಓಲಗ; ಪಾಂಡವರು ಕುಳಿತು ಮಾತಾಡುತ್ತಿರುವರು.)

ಧರ್ಮರಾಯ: ಸಹೋದರರೇ, ಚಾರಕನಿಂದ ಸ್ವಾಮಿಯು ಬರೋಣದ ವಿಚಾರ ಅರಿತೆವಷ್ಟೆ. ನಾವು ಈ ರೀತಿ ಸುಮ್ಮನಿರುವುದಲ್ಲ. ಕೃಷ್ಣನನ್ನು ಇದಿರ್ಗೊಂಡು ಸತ್ಕರಿಸಿ ಕರೆತರಬೇಕು. ಎಲ್ಲರೂ ಹೊರಡಿರಿ. (ಹೊರಡುವಾಗಲೇ ಶ್ರೀಕೃಷ್ಣನು ಪ್ರವೇಶಿಸುವನು.)

ಧರ್ಮರಾಯ: (ವಂದಿಸಿ) ಪರಮಾತ್ಮ, ವಂದಿಸಿರುವೆನು.

ಶ್ರೀಕೃಷ್ಣ: ಏಳಯ್ಯಾ ಏಳು.

ಭೀಮ: ಸ್ವಾಮಿ, ವಂದನಂ.

ಶ್ರೀಕೃಷ್ಣ: ಅಗಲಿ, ಏಳು.

ಅರ್ಜುನ: ದೇವ, ತಮ್ಮ ಪಾದಾರವಿಂದಗಳಿಗೆರಗಿರುವೆನು.

ಶ್ರೀಕೃಷ್ಣ: ಭಾವ, ಏಳುವವನಾಗು.

ಧರ್ಮರಾಯ: (ಮುಂದೆ ಬಂದು) ಭಗವಾನ್, ಈ ಆಸನವನ್ನು ಅಲಂಕರಿಸಬೇಕು.

ಶ್ರೀಕೃಷ್ಣ: ನಮ್ಮ ಮನೆಯಲ್ಲಿ ನಮಗಿಷ್ಟು ಉಪಚಾರವೇಕೆ? ಎಲ್ಲರೂ ಕುಳಿತುಕೊಳ್ಳಿ ಧರ್ಮರಾಜ, ಭೀಮ, ಅರ್ಜುನಾದಿಗಳೇ, ಥಕ್ಕನೆ ನಿಮ್ಮ ಕರೆಯೋಲೆ ಇಲ್ಲಿಂದ ಹೊರಟಿತಷ್ಟೆ. ಕಾರಣವೇನು?

ಧರ್ಮರಾಯ: ಕೃಷ್ಣ, ನಾವಿದ್ದೂ ಫಲವಿಲ್ಲದಂತಾಗಿದೆ.

ಶ್ರೀಕೃಷ್ಣ: ಅಷ್ಟು ಕಠಿಣವಾದುದೇ? ನನಗೊಂದೂ ಅರ್ಥವಾಗುವುದಿಲ್ಲ..........(ಆಲೋಚಿಸಿ) ನಿಮಗೇನಾದರೂ ದುರುಳ ಕೌರವರಿಂದ ಅಥವಾ ದಾನವರಿಂದ ಕೇಡು ಸಂಭವಿಸಿದೆಯೋ?

ಧರ್ಮರಾಯ: ನಿನ್ನ ಸಂಪೂರ್ಣ ಕೃಪೆಯಿರುವ ತನಕ ಅವರ ಬೆದರಿಕೆಯೇನು, ಭಗವಾನ್?

ಶ್ರೀಕೃಷ್ಣ: ಹಾಗಿದ್ದರೆ (ಆಲೋಚಿಸುತ್ತಾ) ಸಹೋದರರೊಳಗೇನಾದರೂ ಕಲಹವೆ? ಅಥವಾ ಪ್ರಜೆಗಳು ಅತೃಪ್ತರಾಗಿರುವರೇ?

ಧರ್ಮರಾಯ: ಭಗವಾನ್, ಸಹೋದರರೆಲ್ಲರೂ ಅನ್ಯೋನ್ಯ ಪ್ರೀತಿಗಳಿಂದಿರುವೆವು. ಪ್ರಜೆಗಳೂ ಸುಖದಿಂದಿರುವರು. ನಮ್ಮಲ್ಲಿಗೆ ಆ ಸುರಮುನಿಗಳು ಆಗಮಿಸಿ, ನಮ್ಮ ಕರ್ತವ್ಯದ ವಿಚಾರದಲ್ಲಿ ಎಚ್ಚರಿಸಿ ಹೋದರು.

ನಮ್ಮ ಜನಕನಿಗೆ, ಅಮರಲೋಕದಲ್ಲಿ ಇತರ ರಾಜರುಗಳಿಗೆ ಲಭಿಸಿದ ಪದವಿ ದೊರಕದೆ ಇದ್ದು, ಆತನು ಚಿಂತಾಕ್ರಾಂತನಾಗಿರುವನಂತೆ!

ಶ್ರೀಕೃಷ್ಣ: ಅದಕ್ಕೇನು ದಾರಿಯೆಂದರು?

ಧರ್ಮರಾಯ: ರಾಜಸೂಯ ಯಾಗವನ್ನು ಜರಗಿಸಬೇಕೆಂದು ಮುನಿಗಳು ಸೂಚಿಸಿ ತೆರಳಿರುವರು.

ಶ್ರೀಕೃಷ್ಣ: ಏನದು? ರಾಜಸೂಯಾಧ್ವರ? ನಿಮ್ಮಿಂದ? ನಾರದರ ಆದೇಶ? ಅದಿರಲಿ,—ಏನುತ್ತರವಿತ್ತರಿ?

ಧರ್ಮರಾಯ: ಉತ್ತರವೇನು? ತಂದೆಗೆ ಯೋಗ್ಯ ಗತಿಯನ್ನು ಒದಗಿಸಿಕೊಡದ ಮಕ್ಕಳಾದ ನಾವಿದ್ದು ಫಲವೇನು? ಅದರಿಂದಾಗಿ ಸಮ್ಮತಿಸಿದೆನು. ಈಗ ಆಲೋಚಿಸುವಾಗ ತುಂಬಾ ಬೆದರಿಕೆಯಾಗುತ್ತಿದೆ. ಸುರಮುನಿಗಳು ಹೋದಲ್ಲೆಲ್ಲಾ ಪ್ರಚಾರಮಾಡದೆ ಎಂದಿಗೂ ಇರರು. ಕ್ರಮೇಣ ಈ ವಾರ್ತೆ ಸುರಲೋಕದ ವರೆಗೂ ತಲಪಿ ಎಲ್ಲರೂ ನಗುವ ಪ್ರಸಂಗ ಬಂದರೂ ಬರಬಹುದು. ಅದಕ್ಕಾಗಿ ನಾವೆಲ್ಲ ಯೋಚನಾಪರರಾಗಿರುವೆವು.

ಶ್ರೀಕೃಷ್ಣ: ಆ ವಿಚಾರದಲ್ಲಿ ನಾನೇನು ಮಾಡಬೇಕೆಂದು ನಿನ್ನ ಯೋಚನೆ, ಧರ್ಮಜ?

ಧರ್ಮರಾಯ: ಭಗವಾನ್, ನಾನು ನಿಶ್ಚಯಿಸಿರುವ ಈ ಯಾಗವನ್ನು ಪೂರೈಸಿಕೊಟ್ಟು ನಮ್ಮನ್ನು ಉದ್ಧರಿಸಬೇಕೆಂದು ನನ್ನ ಪ್ರಾರ್ಥನೆ.

ಶ್ರೀಕೃಷ್ಣ: ಪಾಂಡವರೇ, ಸರಿ. ಈಗ ತಿಳಿಯಿತು. ನಾರದರ ಆಗಮನ....ಅದರಿಂದಾಗಿ ಅಪ್ಪನ ಆಗುಹೋಗುಗಳ ವರ್ತಮಾನ....ರಾಜಸೂಯ ಯಾಗ ಮಾಡುವಂತೆ ನಿಮ್ಮ ನಿರ್ಧಾರ....ಧರ್ಮರಾಜ, ನೀನೊಬ್ಬ ಸಾಮಾನ್ಯ ವ್ಯಕ್ತಿಯಲ್ಲವೆಂಬ ಭಾವನೆ ಈ ವರೆಗೆ ನನ್ನಲ್ಲಿತ್ತು. ಆದರೆ, ಈ ದಿನ ಹೀಗೇಕೆ ಮಾಡಿದೆ ಎಂಬುದೇ ಸಮಸ್ಯಾತ್ಮಕ ವಿಷಯವಾಗಿ ಪರಿಣಮಿಸಿದೆ.

ಧರ್ಮರಾಯ: ಭಗವಾನ್, ಏನದು? ಹಾದಿ ತಪ್ಪಿದೆನೇ?

ಶ್ರೀಕೃಷ್ಣ: ಪೂರ್ವಾಪರ ವಿಚಾರಿಸದೆ ಒಂದು ಕಾರ್ಯಕ್ಕೆ ಕೈಹಚ್ಚಿದರೆ ಹಾದಿ ತಪ್ಪಿದಂತೆಯೆ ಎಂದು ಭಾವಿಸು. ಅದರ ಪರಿಣಾಮವು ಸುಗಮವಾಗಲಾರದು. ರಾಜಸೂಯ ಯಾಗವೆಂದರೆ ಸಾಮಾನ್ಯವಾದುದೆಂದು ಭಾವಿಸಿದಿರಾ? ಜಗದ ರಾಜರುಗಳಿಗೆ ಅಸೂಯೆಯನ್ನು ಹುಟ್ಟಿಸುವಂತ

ಹೆದು! ಅವರೆಲ್ಲರನ್ನೂ ಗೆದ್ದು, ಅವರ ನೆರವಿನಿಂದ ನಡೆಯಬೇಕಾದ ಮಹಾ ಯಜ್ಞವದು ಅಷ್ಟೊಂದು ಸುಲಭವಾಗಿರುತ್ತಿದ್ದರೆ ಅನೇಕರು ಯತ್ನಿಸುತಿದ್ದರು. ನೀವೇ ಯೋಚಿಸಿ. ಜಗತ್ತಿನಲ್ಲಿರುವ ಎಲ್ಲ ರಾಜರನ್ನು ಗೆಲ್ಲಲು ನಿಮ್ಮಿಂದ ಸಾಧ್ಯವಿದೆಯೇ? ಎಲ್ಲರನ್ನೂ ಸೋಲಿಸಬಹುದಾದರೂ ಒಬ್ಬಿಬ್ಬರ ಹೆಸರನ್ನು ಎತ್ತಿದೊಡನೆ ನನಗೇ ನಡುಕವುಂಟಾಗುತ್ತದೆ.

ಧರ್ಮರಾಯ: ಯಾರವರು? ಅಪ್ಪಣೆಯಾಗಲಿ.

ಶ್ರೀಕೃಷ್ಣ: ಮತ್ತಾರು? ಮಗಧದೇಶದ ರಾಜನಾದ ಜರಾಸಂಧನು ಒಬ್ಬನು,ಅವನಂತೆಯೇ ದುರುಳರ ಪಾಲಿಗೆ ಸೇರಿಸಲು ಅರ್ಹನಾದ ಚೈದ್ಯನು ಮತ್ತೊಬ್ಬನು. ಮಾಗಧನು–ಮಹಾಬಲಾಢ್ಯನು ಮಾತ್ರವಲ್ಲ, ದುಷ್ಟನು. ಹಲವು ಬಾರಿ ಆತನೊಡನೆ ಹೋರಾಡಿ ಸೋತ ಪ್ರತ್ಯಕ್ಷ ಅನುಭವ ನನಗಿದೆ. ಕಡೆಗೆ ಆತನ ಹಾವಳಿ ಸಹಿಸಲಾರದೆ ನೀರ ಮಧ್ಯೆ ದ್ವಾರಕೆಯನ್ನು ನಿರ್ಮಿಸಿ ಬಾಳಬೇಕಾಯಿತು. ನನ್ನ ಹೆಸರು ಕೇಳಿದೊಡನೆ ಮುನಿವ ಆ ದುಷ್ಟನು ನಾನಿದ್ದು ಆಗುವ ಈ ಯಜ್ಞವನ್ನು ಆಗಗೊಡುವನೇ? ಅದರಂತೆಯೇ ಶಿಶುಪಾಲಾದಿಗಳು. ಮತ್ತೊಂದು ವಿಷಯ:—ನಿನ್ನವರೇ ಅದ ಕೌರವರು ಇದನ್ನು ನೋಡಿ ಸಹಿಸುವರೇ? ಸರಿಯಾಗಿ ಯೋಚಿಸು.

ಧರ್ಮರಾಯ: ಕೃಷ್ಣ, ನನ್ನ ಈ ಒಂದು ಆಶೆಯು ಕೈಗೂಡುವ ಸಂಭವವಿಲ್ಲವೆಂದೇ ನಿನ್ನ ಸೂಚನೆಯೇ?

ಶ್ರೀಕೃಷ್ಣ: ಅನುಮಾನವೇನು? ಪ್ರಪಂಚದ ಪರಾಕ್ರಮಿಗಳೆಲ್ಲರನ್ನೂ ಜಯಿಸಿದರೂ, ಮಾಗಧ-ಶಿಶುಪಾಲಾದಿಗಳನ್ನು ಸೋಲಿಸುವವರಾರು? ಮುನಿಯ ಮಾತಿಗೆ ಮರುಳಾಗಿ ನಗೆಗೀಡಾಗಬಹುದೇ? ವಿಟಪುರುಷರು ನಾರಿಯರ ಮಧ್ಯೆ ಕುಳಿತು ಅಸಾಧ್ಯವಾದ ಕಾರ್ಯಗಳನ್ನು ಮಾಡಬಲ್ಲೆವೆಂದು ನುಡಿಯುವಂತೆ, ಏಕೆ ನಾರದರ ಮಾತಿಗೆ ಸಮ್ಮತಿಸಿದೆ?

ಭೀಮ: (ಕೋಪದಿಂದ) ಅಣ್ಣಾ, ಶ್ರೀಹರಿಯು ಏನನ್ನುತ್ತಿರುವನು? ಯಾಗವು ಅಸಾಧ್ಯವಾದುದೇ? ಮಾಗಧನು ಅಷ್ಟು ಬಲಾಢ್ಯನೇ? ಶಿಶುಪಾಲನಿಗೆ ಬೆದರಿ ನಮ್ಮ ಕಾರ್ಯವನ್ನು ನಿಲ್ಲಿಸಬೇಕಾಗಿ ಬರಬಹುದೇ? ಬಿಡಿ ಆ ನುಡಿ! ಯಾಗವಾಗಲೇ ಬೇಕು. (ಕೃಷ್ಣನ ಕಡೆ ತಿರುಗಿ) ಕೃಷ್ಣ, ಜರಾಸಂಧನಿಗೇಕೆ ಬೆದರುವೆ? ನನ್ನ ಕೈಯಲ್ಲಿ ಇನ್ನೀ ಗದೆಯು ಕುಣಿದಾಡು

ತ್ತಿರುವುದನ್ನು ಕಂಡ ಮೇಲೂ ಧೈರ್ಯವುಂಟಾಗುವುದಿಲ್ಲವೇ? ಆತನನ್ನು ಈ ಗದೆಯಿಂದ ಹೊಡೆದು ಕೊಲ್ಲುವೆನು. ಅನುಮತಿಯನ್ನು ಕೊಡು.

ಶ್ರೀಕೃಷ್ಣ: ಭೀಮಸೇನ, ರಾಕ್ಷಸಿಯೋರ್ವಳ ಗಂಡನಾದವನ್ನು ಸುಲಭವೆಂದು ಬಗೆಯದಿರು.

ಭೀಮ: ದೇವ, ಬೆದರದಿರು. ಜರಾಸಂಧನನ್ನು ವಧಿಸುವ ಭಾರ ನನ್ನ ಮೇಲಿರಲಿ. ಈ ಭೀಮಸೇನನು ಆಡಿದ ನುಡಿಗೆ ಬದಲಿಲ್ಲವೆಂದು ತಿಳಿ. ಅಣ್ಣ, ಯಜ್ಞಕ್ಕೆ ಬೇಕಾದ ಇತರ ಸಿದ್ಧತೆಗಳನ್ನು ಒದಗಿಸು. ನಾನೀಗಲೇ ಆ ದುಷ್ಟನ ನಾಶಕ್ಕೆ ಮುಂದುವರಿಯುವೆನು. (ಗದೆಯು ಕಡೆಗೆ ನೋಡುವನು.)

ಶ್ರೀಕೃಷ್ಣ: ಭಲಾ, ಭೀಮ.

ಅರ್ಜುನ: ಅಸುರಾಂತಕ, ಎಷ್ಟು ಕಷ್ಟಗಳು ಬಂದರೂ ಅನುಭವಿಸುವಷ್ಟು ಶಕ್ತಿ ನಿನ್ನ ದಯೆಯಿಂದ ನಮಗಿದೆ. ಜಗತ್ತಿನ ಎಲ್ಲ ರಾಜರಿಂದ ಕಪ್ಪವನ್ನು ಸಂಗ್ರಹಿಸಿ ನಾನು ತಂದು ಕೊಡುವೆನು.

ಶ್ರೀಕೃಷ್ಣ: ಆಡಿದಷ್ಟು ಮಾಡಬಲ್ಲೆಯಷ್ಟೆ?

ಅರ್ಜುನ: ದೇವ, ಅಷ್ಟೊಂದು ಕಾರ್ಯಗಳನ್ನು ಎಸಗಲಾರದೆ ಹೋದೆನಾದರೆ ನನಗೀ ದೈವದತ್ತವಾದ ಗಾಂಢೀವ ಹಾಗೂ ಅಸ್ತ್ರಗಳು ಇದ್ದು ಫಲವೇನು? (ಧರ್ಮಜನ ಕಡೆಗೆ) ಅಣ್ಣಾ, ಧರಣಿಯು ಎಲ್ಲಾ ರಾಜರುಗಳಿಗೆ ಹಾಗೂ ಯೋಗ್ಯ ಬ್ರಾಹ್ಮಣರೇ ಮೊದಲಾದ ಯಾವತ್ತೂ ಜನರುಗಳಿಗೆ ಓಲೆಗಳನ್ನು ಕಳುಹಿಸಿ ಮುಂದಿನ ಸಿದ್ಧತೆಗಳನ್ನೆಸಗು. ಅಣ್ಣನಾದ ಭೀಮನೊಂದಿಗೆ ದಿಗ್ವಿಜಯಕ್ಕೆ ನಾನೂ ಹೊರಡುವೆನು.

ಶ್ರೀಕೃಷ್ಣ: ಭಲಾ, ಅರ್ಜುನ! ಹಾಗಿರಬೇಕು ಸಾಮರ್ಥ್ಯ ಹಾಗೂ ದೃಢತೆ. ಧರ್ಮರಾಜ, ಇನ್ನು ಬೆದರಿಕೆಯಿಲ್ಲ. ಬೇಸರಿಸದಿರು. ಇನ್ನು ಅನುಮಾನವಿಲ್ಲ. ಯಾಗದೀಕ್ಷಿತನಾಗು. ಏಳು, ಭೀಮಾರ್ಜುನರನ್ನು ನನ್ನ ವಶಕ್ಕೊಪ್ಪಿಸು. ವೈರಿಗಳ ವಧೆಗಾಗಿ ನಾವು ಮೂವರು ಈಗಲೇ ಹೊರಡುವೆವು.

ಧರ್ಮರಾಜ: ಆಗಲಿ, ದೇವ, ನಿನ್ನ ಅನುಜ್ಞೆಯಂತೆ. ಆದಷ್ಟು ಬೇಗನೆ ಜಯಲಲನೆಯೊಂದಿಗೆ ಮರಳಿ ಬನ್ನಿರಿ. ಹೋಗಿರಿ.

(ತೆರಳುವರು. ಪರದೆ ಬೀಳುವುದು.)

## ದೃಶ್ಯ ೫.

(ರಸ್ತೆ. ಭೀಮ, ಕೃಷ್ಣಾರ್ಜುನರು ಪ್ರವೇಶಿಸುವರು.)

ಶ್ರೀಕೃಷ್ಣ: ಭೀಮಾರ್ಜುನರೇ, ಧರ್ಮರಾಯನ ಅಪ್ಪಣೆಯನ್ನು ಪಡೆದು ಪೂರ್ವಮುಖವಾಗಿ ನಡೆದು ನಡೆದು ಮಾಗಧನ ಪೊಡವಿಯನ್ನು ಪ್ರವೇಶ ಮಾಡಿದೆವು. ನಮ್ಮೊಡನೆ ಬಂದ ಸೇನೆಯನ್ನು ಪರ್ವತದ ಬುಡದಲ್ಲಿ ಇರಿಸಿದುದೂ ಆಯಿತು. ಇನ್ನು ನಾವು ಬಹಳ ಜತನದಿಂದಿರುವುದು ಅವಶ್ಯವಿದೆ. ಅದೋ ಈ ಪರ್ವತದ ಶಿಖರದಲ್ಲಿ ಕಾಣುವ ಭೇರಿತ್ರಯಗಳಿವೆಯಲ್ಲ,—ಇವುಗಳು ಸಾಮಾನ್ಯವಾದವುಗಳಲ್ಲ. ಈ ಜರಾಸಂಧನಿಗೆ ಈಶ್ವರನು ದಯಪಾಲಿಸಿದ್ದ—ವೃಷಭಾಸುರನ ಚರ್ಮದಿಂದ ತಯಾರಿಸಿದ ಭೇರಿಗಳಿವು. ಯಾವನು ಈ ನೆಗಾರಿಯನ್ನು ಬಾರಿಸಿ ದಿಗ್ವಿಜಯಕ್ಕೆ ಹೊರಡುವನೋ ಅವನಿಗಂತೂ ಜಯಭಾಮಿನಿಯು ಒಲಿಯುವುದರಲ್ಲಿ ಅನುಮಾನವೇ ಇಲ್ಲ. ಆದುದರಿಂದ ನಾವೀಗಲೇ ಈ ಶಿಖರವನ್ನೇರಬೇಕು. ತಡಮಾಡದೆ ಮೂರು ಭೇರಿಗಳನ್ನು ಬಲವಾಗಿ ಬಾರಿಸಿ ಮುಂದಿನ ಕಾರ್ಯಗಳಿಗೆ ಕೈಹಚ್ಚಬೇಕಾಗಿದೆ. ಅದರ ಮೊದಲು ಒಂದೆರಡು ಸೂಚನೆಗಳನ್ನು ಕೊಡುವವನಿದ್ದೇನೆ. ಶಿಖರದ ಮೇಲಿಂದ ಇಳಿದೊಡನೆ ಅಡ್ಡ ಬರುವ ಕೋಟೆಗಳನ್ನು ಮುರಿದು ಮಾಗಧನ ಯಾಗಶಾಲೆಯನ್ನು ಪ್ರವೇಶಿಸಬೇಕಾಗುವುದು. ಆದರೆ, ನಮ್ಮ ನಿಜವೇಷದಿಂದ ಮುಂದುವರಿದರೆ ಕಾರ್ಯವಾಗಲಾರದು. ನಾವು ಮೂವರೂ ಬ್ರಾಹ್ಮಣರ ವೇಷ ಧಾರಣೆಮಾಡಿ ಯಾಗಮಂದಿರದ ಅಪರದ್ವಾರದಲ್ಲಿ ಒಳಪ್ರವೇಶಿಸಬೇಕು.

ಭೀಮ: ಅದೇಕೆ ಕೃಷ್ಣ? ವೇಷ ಧಾರಣೆಮಾಡಿ ಅಪರದ್ವಾರದಿಂದ ಪ್ರವೇಶ?

ಶ್ರೀಕೃಷ್ಣ: ಭೀಮ, ಇಂದು ನಮ್ಮ ಉದ್ದೇಶ ಮಾಗಧನೊಬ್ಬನನ್ನು ಕೊಲ್ಲುವುದಲ್ಲದೆ ಅತನ ಅನುಯಾಯಿಗಳನ್ನು ಕೊಲ್ಲುವುದಲ್ಲ. ದುಷ್ಟರಾಗಿದ್ದ ಹಿಂಬಾಲಕರೆಲ್ಲರೂ ಈ ಮೊದಲೇ ನನ್ನಿಂದ ಕೊಲ್ಲಲ್ಪಟ್ಟು, ಈಗ ಉಳಿದವರೆಲ್ಲರೂ ಈತನ ಹೊಗೆಯನ್ನೊಮ್ಮೆ ಕಂಡರೆ ಸಾಕೆಂದು ಕಾಯುತ್ತಿರುವರು. ಆದುದರಿಂದ ನಮ್ಮ ನಿಜ ವೇಷದಿಂದ ಹೆಬ್ಬಾಗಿಲಲ್ಲೇ ಪ್ರವೇಶಿಸಿದರೆ ಘರ್ಷಣೆ ನಡೆದು ಕೆಲವರು ಸಾಯುವ ಪ್ರಸಂಗವೊದಗಲೂ ಸಾಕು. ಬ್ರಾಹ್ಮಣರಿಗಾದರೋ ಎಲ್ಲಿಯೂ ತಡೆಯಿಲ್ಲದೆ ಪ್ರವೇಶವಿದೆ. ಆದರಿಂ

ದಾಗಿ ನಮ್ಮ ಕಾರ್ಯವು ಶಾಂತರೀತಿಯಿಂದ ಕೈಗೂಡಬಲ್ಲದು. ಇದು ಒಂದು ವಿಚಾರ. ಮತ್ತೊಂದು ವಿಷಯ–ಅಲ್ಲಿ ನಾಲಿಗೆಯಿಂದ ನಡೆಸ ಬೇಕಾದ ಯಾವತ್ತೂ ಯುದ್ಧವನ್ನು ನಾನೆಸಗಲಿರುವೆನು. ಭುಜಬಲ ಪ್ರದರ್ಶನದ ಪ್ರಸಂಗ ಒದಗಿದಾಗ ಮಾತ್ರ ನೀವು ಮುಂದಾದರೆ ಸಾಕು. ಜಾಗ್ರತೆಯಿಂದ ಮುಂದುವರಿಯಿರಿ. (ತೆರಳುವರು.)

## ದೃಶ್ಯ ೬.

(ಮಾಗಧನ ಯಾಗಶಾಲೆ. ಜರಾಸಂಧನು ಯಜ್ಞದ ಕಾರ್ಯಗಳಲ್ಲಿ ಮಗ್ನನಾಗಿರುವನು. ಬ್ರಾಹ್ಮಣರೇ ಮೊದಲಾದವರೆಲ್ಲರೂ ತಮ್ಮ ತಮ್ಮ ಕಾರ್ಯಗಳಲ್ಲಿ ಮಗ್ನರಾಗಿರುವರು. ಅಷ್ಟರಲ್ಲಿ ಒಳಗಿನಿಂದ ಭೇರಿ ಬಾರಿಸಿದ ಶಬ್ದವಾಗುವುದು.)

ಜರಾಸಂಧ: (ಆಶ್ಚರ್ಯದಿಂದ) ಏನದು?....ಏನು ಕೇಳುತ್ತಿದ್ದೇನೆ.... ಹಾಂ....ಭೇರಿ ಬಾರಿಸಿದ ಭಯಂಕರ ಶಬ್ದ!....ಅದೂ ಈ ಮಧ್ಯರಾತ್ರಿಯ ಕಾಲದಲ್ಲಿ!!....ಅದರಲ್ಲೂ ಯಾಗವು ಸಾಂಗವಾಗಿ ನಡೆಯುತ್ತಿರುವ ಈ ಸಮಯದಲ್ಲಿ!!! ಏನು ಆಶ್ಚರ್ಯ! ಈ ವರೆಗೆ ಈ ಜರಾಸಂಧನಲ್ಲದೆ ಮತ್ತೊರ್ವನು ಭೇರಿ ಬಾರಿಸಿದವರಿಲ್ಲ. ಬೆಟ್ಟದ ತುಟ್ಟತುದಿಯಲ್ಲಿರಿಸಿದ ನನ್ನ ಮೂರೂ ಭೇರಿಗಳನ್ನು ಬಾರಿಸಿದವರು ಯಾರು?........ಮಾಗಧನ ಹೆಸರನ್ನು ಕೇಳಿದೊಡನೆ ಪ್ರಪಂಚದ ಪ್ರತಿಯೊಬ್ಬರೂ ಬೆದರಿಕೆಯಿಂದ ನಡುಗುತ್ತಿರುವ ಈ ಕಾಲದಲ್ಲಿ ಇದಾವ ಮೂರ್ಖರ ಕೈವಾಡ?....ಹಾಂ.... ಹಾಂ....(ಅಷ್ಟರಲ್ಲಿ ಅಪರ ದ್ವಾರದಲ್ಲಿ ಮೂವರು ಬ್ರಾಹ್ಮಣರು ಪ್ರವೇಶಿಸುವರು. ಅವರನ್ನು ಕಂಡು) ಓಹೋ....ಬ್ರಾಹ್ಮಣರು....ಈ ಯಜ್ಞದ ಸಮಯದಲ್ಲಿ ಪ್ರವೇಶಿಸಿದುದು ನನ್ನ ಭಾಗ್ಯವೇ ಸರಿ. ಸ್ನಾತಕರೇ, ಈ ಕಡೆಗೆ ದಯಮಾಡಿಸಿ. ಮೂವರೂ ಯೋಗ್ಯವಾದ ಆಸನಗಳನ್ನಲಂಕರಿಸಿರಿ. ಮಧುಪರ್ಕಾದಿ ಪೂಜೆಯನ್ನು ನೆರವೇರಿಸಲಿರುವೆನು. (ಜರಗಿಸಿ) ಬ್ರಾಹ್ಮಣೋತ್ತಮರೇ, ತಮ್ಮ ಪವಿತ್ರವಾದ ಪಾದಾರವಿಂದಗಳಿಗೆರಗಿರುವೆನು. (ತಲೆಯೆತ್ತಿ ಅನುಮಾನದಿಂದ) ಸ್ವಾಮಿ, ಇದೇನು ಹೊಸ ರೀತಿ? ಅಡಿಗಳಿಗೆರಗಿದವನಿಗೆ ಯೋಗ್ಯ ಆಶೀರ್ವಾದಗಳನ್ನೀಯುವ ಕ್ರಮವೂ ನಿಮ್ಮಲ್ಲಿಲ್ಲವೇ? ನ್ಯಾಯವಾಗಿ ದ್ವಿಜರು ಅನುಸರಿಸುವ ಪದ್ಧತಿಗಳಿಗೆ ವ್ಯತಿರಿಕ್ತವಾಗಿ ನಡೆಯುತ್ತಲಿರುವ ನಿಮ್ಮನ್ನು ಕಾಣುವಾಗ ಅದೇಕೋ ಅನು

ಮಾನವುಂಟಾಗುತ್ತಿದೆ. ಆದಿರಲಿ.... ನೀವು ಮೂವರು ಯಾರು, ಸ್ವಾಮಿ? ನಿಮ್ಮ ದೇಶವಾವುದು? ಗೋತ್ರ ಯಾವುದು? ನೀವು ಅಪರ ರಾತ್ರಿಯ ಕಾಲದಲ್ಲಿ ಅಪರ ದ್ವಾರದ ಮೂಲಕ ಯಾಗಶಾಲೆಯನ್ನು ಪ್ರವೇಶ ಮಾಡಿದುದರ ಕಾರಣವೇನು?.... ಬೇಗನೆ ಹೇಳಿ.

ಶ್ರೀಕೃಷ್ಣ: ಜರಾಸಂಧ, ನಮ್ಮ ವಿಚಾರಗಳನ್ನು ಅರಿಯಲು ಅಷ್ಟೊಂದು ಆತುರಪಡುವೆಯಾ? ಅದಕ್ಕಾಗಿಯೇ ಹೀಗೆಲ್ಲಾ ಮಾಡಿದುದು; ಆದರೆ, ಅರಿಗಳಲ್ಲಿ ನಿಜವಾದುದನ್ನು ಆಡಬಾರದೆಂದು ಶಾಸ್ತ್ರನಿಯಮವಿದೆಯಲ್ಲ.

ಜರಾಸಂಧ: ನಾನು ನಿಮಗೆ ಶತ್ರುವೇ? ಜಗತ್ತಿನ ಯಾವ ಬ್ರಾಹ್ಮಣರ ತಂಡವೂ ನನ್ನ ಮೇಲೆ ವೈರತ್ವದಲ್ಲಿದೆಯೆಂಬ ಭಾವನೆ ಈ ವರೆಗೆ ನನಗಿರಲಿಲ್ಲ. ಬ್ರಾಹ್ಮಣರಿಗೆ ಮಾತ್ರವೇಕೆ? ಯಾವ ರಾಜರಿಗಾದರೂ ಶತ್ರುತ್ವವನ್ನು ಕಟ್ಟಿಕೊಂಡು ನನ್ನ ಮಂದಿರವನ್ನು ಪ್ರವೇಶಮಾಡುವಷ್ಟು ಧೈರ್ಯವಿರಲಾರದೆಂದು ನನ್ನ ನಂಬಿಕೆ. ಯಾರು ಬರುವವರು? ಆ ಹಸ್ತಿನಾಪತಿಯು ದೊರೆ.... ನನ್ನ ಆಪ್ತರ ಸಾಲಿಗೆ ಸೇರಿದವರು. ಇನ್ನು ಅವರ ಸೋದರರಾದ ಪಾಂಡವರು.... ಅವರು ಕದನಾಕಾಂಕ್ಷಿಗಳಲ್ಲ.... ಮತ್ತುಳಿದವರು ಯಾದವರು.... ಅವರು ನಿರ್ಲಜ್ಜರು.... ಆ ಕಳ್ಳ ಕೃಷ್ಣನನ್ನು ನಂಬಿ ಕಟ್ಟಿದ ಒಂದು ವಂಶವು ವೈರತ್ವವನ್ನು ಸಾಧಿಸಬಲ್ಲುದೇ? ಉಳಿದವರೆಲ್ಲರೂ ನನಗೆ ಅನುಕೂಲರೆಂದ ಮೇಲೆ ಶತ್ರುಗಳಾಗಿ ಬಂದ ನೀವಾರು? ವೈರತ್ವದ ಕಾರಣವೇನು? ಬೇಗನೇ ಹೇಳಿ.

ಶ್ರೀಕೃಷ್ಣ: ಕಾರಣವಿಲ್ಲದೆ ವೈರತ್ವವಿಲ್ಲ! ಹಲವಾರು ರಾಜಕುಮಾರರನ್ನು ನಿನ್ನ ಅಹಂಕಾರದ ಪ್ರಭಾವದಿಂದ ಬಂಧಿಸಿ, ಸೆರೆಯೊಳಗಿಟ್ಟು ಅವರನ್ನು ಪೀಡಿಸುತ್ತಿರುವೆಯಲ್ಲಾ. ಲೋಕದ ನ್ಯಾಯಗಳಿಗೆ ವಿರುದ್ಧವಾದ ಕ್ರಮದಿಂದ ನೀನು ತನ್ನ ದರ್ಪವನ್ನು ಪ್ರದರ್ಶಿಸುತ್ತಿರುವುದೇ ನಮ್ಮೊಳಗಿನ ವೈರತ್ವಕ್ಕೆ ಕಾರಣವೆಂದು ತಿಳಿ. ನಿನ್ನ 'ನರಮೇಧ' ಯಾಗದ ಮೊದಲೇ ಅವರೆಲ್ಲರನ್ನೂ ಬಿಡುಗಡೆ ಮಾಡುವಂತೆ ಅವರ ಪರವಾಗಿ ನಿನ್ನನ್ನು ಕೇಳಲು ಬಂದ ನ್ಯಾಯಾನ್ಯಾಯ ವಿಮರ್ಶಕರು ನಾವು, ತಿಳಿಯಿತಷ್ಟೆ. ಹೂಂ.... ಅವರನ್ನು ಬೇಗನೆ ಬಂಧನದಿಂದ ಬಿಡಿಸು........ ಇದು ನಮ್ಮ ಆದೇಶ.

ಜರಾಸಂಧ: ರಾಜಕುಮಾರರನ್ನು ಬಿಡುಗಡೆ ಮಾಡು! ಆಜ್ಞೆ ಕೊಡಲು ನೀನಾರು? ಅವರೆಲ್ಲರ ತಮ್ಮನೋ? ಮಗನೋ? ಬಂಧುವೋ?

ಮುಂದೆ ಸಿಗಬಹುದಾದ ಯಾವ ಲಾಭದ ಆಶೆಯಿಂದ ಅವರ ಪರವಾಗಿ ವಾದಿಸತೊಡಗಿರುವೆ? (ದರ್ಪದಿಂದ) ನನ್ನಲ್ಲಿಗೆ ಬಂದು, ನನಗೀ ರೀತಿ ಆಜ್ಞೆಯೀಯಲು ನಿನಗೇನು ಅಧಿಕಾರ? ಅದನ್ನು ಮೊದಲು ಹೇಳು?

ಶ್ರೀಕೃಷ್ಣ: ಅಧಿಕಾರವೇ? ಇದ್ದೇ ಇದೆ. ನಿಮ್ಮಂತೆ ಮುಂದಿನ ಲಾಭದ ಕನಸನ್ನು ಕಂಡು ಇಂದು ಕಾರ್ಯಕ್ಕೆ ಮುಂದಾಗುವವರು ನಾವಲ್ಲ. ನಮಗೆ ಬೇಕಾದುದು ನ್ಯಾಯ....ನಮಗೆ ಬೇಕಾದುದು ಧರ್ಮ. ಜಗತ್ತಿನಲ್ಲಿ ಅನ್ಯಾಯವು ಅಧಿಕವಾಗಿ ಅಧರ್ಮದ ತಾಂಡವವಾರಂಭವಾದಾಗ ಅನ್ಯಾಯಗಳನ್ನು ಮುರಿದು, ಧರ್ಮಾತ್ಮರನ್ನೂ, ನ್ಯಾಯವಂತರಾದ ಬಲಹೀನರನ್ನೂ ಕಾಪಾಡುವ ಕರ್ತವ್ಯ ನಮ್ಮದು. ಪ್ರಪಂಚದ ಶಿಕ್ಷೆ ಹಾಗೂ ರಕ್ಷಣೆಯ ಭಾರ ನಮ್ಮಲ್ಲಿದೆ ಎಂಬುದನ್ನು ಸರಿಯಾಗಿ ತಿಳಿದುಕೋ.

ಜರಾಸಂಧ: (ಸ್ವಲ್ಪ ಸಿಟ್ಟಿನಿಂದ) ವಂಚಕ್ಕು ಬಾಯಿ! ನಮ್ಮ ಸಭೆಯಲ್ಲಿ ಬೊಗಳದಿರು. ನಿನ್ನ ನಾಲಿಗೆಯನ್ನು ಒಮ್ಮೆಗೇ ಕತ್ತರಿಸಿ ಹಾಕಿಸಿಯೇನು. ಜೋಕೆ! ಹ್ಹಃ! ಮೂವರು ಬ್ರಾಹ್ಮಣರು "ನಾವು ಶಿಕ್ಷೆ ರಕ್ಷೆಗೆ ಅಧಿಕಾರಿಗಳು" ಎಂದು ಹೇಳುತ್ತಾ ತಿರುಗಿದರೆ ಇದಕ್ಕೆ ಅರ್ಥವೇನು? ನಿಮಗೆ ತಲೆ ಸರಿಯಿದೆಯಷ್ಟೆ? ಅಧಿಕ ಪ್ರಸಂಗ ಬಿಟ್ಟು ಹೇಳಿದ ಮಾತಿಗೆ ತಕ್ಕ ಉತ್ತರವಿತ್ತು ಇಲ್ಲಿಂದ ಬೇಗನೆ ಜೀವ ಹಿಡಿದುಕೊಂಡು ದಯಮಾಡಿಸುವುದು ಒಳ್ಳೆಯದು.

ಶ್ರೀಕೃಷ್ಣ: ಮಾಗಧ, ಅಷ್ಟು ಮುಂದುವರಿಯದಿರು. ನಾವು ಬೆದರಿ ನಮ್ಮ ಪರಿಚಯ ಹೇಳಲು ಹಿಂದುಳಿದೆವೆಂದು ತಿಳಿಯದಿರು. ನಮ್ಮ ತಲೆ ಸರಿಯಿದೆ. ನಾವೇನು ಮಾಡುತ್ತೇವೆಂಬ ಅರಿವು ನಮಗೆ ಚೆನ್ನಾಗಿದೆ. ನಮ್ಮ ವಿಚಾರ ತಿಳಿದು ನೀನು ಮಾಡುವುದೇನು? ಜಗತ್ತಿನ ದುಷ್ಟಶಕ್ತಿಗಳನ್ನು ನಿರ್ಮೂಲ ಮಾಡಲು ಜನಿಸಿರುವ ದೇವಕಿ ಕಂದನಾದ ಕೃಷ್ಣನನ್ನು ತಿಳಿದಿರುವಿಯಷ್ಟೆ........ಅವನೇ ನಾನು.

ಜರಾಸಂಧ: (ಆಶ್ಚರ್ಯದಿಂದ) ಕೃಷ್ಣನೇ ನೀನು? ಸರಿ! ನಿನಗೆ ಒಪ್ಪುವ ವೇಷವಿದು. ಆಗಲಿ........ಇವರಾರು?

ಶ್ರೀಕೃಷ್ಣ: ಇವರಲ್ಲಿ ಒಬ್ಬನು ಅರಿಗಳನ್ನು ಅರೆನಿಮಿಷದಲ್ಲಿ ಸಂಹರಿಸುವ ಶಕ್ತಿ ಪಡೆದ ಭೀಮಸೇನ! ಇನ್ನು ಈ ಮೂರನೇಯವನು........ಸುರಪತಿಯೊಂದಿಗೆ ಸರಿಯಾಗಿ ಸೆಣಸಾಡಿ ಮೂರು ಲೋಕದಲ್ಲಿಯೂ 'ವಿಜಯಿ'

ಎಂಬ ಹೆಸರನ್ನು ಸಂಪಾದಿಸಿಕೊಂಡಿರುವ ಮಧ್ಯಪಾಂಡವನು,—ಅರ್ಜುನ. ಬದುಕುವ ಮನಸ್ಸಿದ್ದರೆ ಆ ರಾಜಕುಮಾರರನ್ನು ಸೆರೆಯಿಂದ ಬಿಡಿಸು. ಸಾಯುವ ಯೋಚನೆಯೇ ಆದರೆ ಹೂಂ, ನಮ್ಮೊಂದಿಗೆ ಕಾದಾಡಲು ಸಿದ್ಧನಾಗು.........ಹೂಂ........ಎರಡೇ ಮಾತು! ಏನು ಆಲೋಚನೆ?

ಜರಾಸಂಧ: (ಸಭಿಕರನ್ನುದ್ದೇಶಿಸಿ) ಸಭಾಸದರೇ, ನೀವೆಲ್ಲಾ ಏಕೆ ಬೆದರಿದವರಂತೆ ತೋರುತ್ತಿರುವಿರಿ? ಯಾರೂ ಬೆದರುವ ಅಗತ್ಯವಿಲ್ಲ. ಈ ಮೂರು ವೇಷಗಳೂ ಹೊಸತಲ್ಲ. ಒಬ್ಬನು ಕೃಷ್ಣನಂತೆ, ಇವನು ನನಗೆ ಹತ್ತಿರದ ಬಂಧುವು. ನಮ್ಮ ಕಂಸನಿಗೆ ಅಳಿಯ. ಹಾಗಿರುವಾಗ ನನಗೆ ಮೊಮ್ಮಗನಷ್ಟೆ? ಅಜ್ಜನೆಂಬ ಸಲುಗೆಯಿಂದ ಹೀಗೆ ಮಾತಾಡುತ್ತಿರಲೂ ಬಹುದು. ಇನ್ನು ಇವನ ಬಲದ ವಿಚಾರ. ನನ್ನೊಡನೆ ಅನೇಕ ಸಲ ಯುದ್ಧವನ್ನೆಸಗಿ ಸೋತು, ನನಗೆ ಹೆದರಿ, ಈಗ ಏನೋ ಸಮುದ್ರ ಮಧ್ಯದಲ್ಲಿ ಮನೆ ಕಟ್ಟಿಕೊಂಡು ಹೊಟ್ಟೆತುಂಬಿಸಿಕೊಂಡಿರುವವನು. ಇವನ ಶೀಲದ ವಿಚಾರದಲ್ಲಿ ಹೇಳುವುದಿದ್ದರೆ ಬಾಲ್ಯದಲ್ಲಿ ಹಲವು ಹೆಮ್ಮಕ್ಕಳನ್ನು ಸೋಲಿಸಿ, ಹಾಲು, ಬೆಣ್ಣೆ, ಮೊಸರುಗಳನ್ನು ಕದ್ದು ಸಣ್ಣಪ್ರಾಯದಲ್ಲಿಯೇ 'ಕಳ್ಳರ ಗುರು' ಎಂಬ ಶಾಶ್ವತವಾದ ಹೆಸರನ್ನು ಗಳಿಸಿಕೊಂಡವನು. ಇವನೊಬ್ಬ ನ್ಯಾಯಾನ್ಯಾಯ ವಿಮರ್ಶಕನೇ? ಇಂಥವನೂ ರಾಜಕುಮಾರರ ಕಡೆಯಿಂದ ಪ್ರತಿನಿಧಿಯಾಗಿ ಬಂದು ಅವರನ್ನು ಸೆರೆಬಿಡಿಸುವವನೇ? ಅಥವಾ ಇವನೂ ಒಬ್ಬ ಯೋಗ್ಯನೇ? ನೀವೇ ವಿಚಾರಿಸಿ. ಉಳಿದವರಿಬ್ಬರು ಅವನ ಭಾವಂದಿರು. ಅವರಿಗೆ ಮತಿಗೆಟ್ಟಿದೆಯೋ ಎಂಬ ಅನುಮಾನವುಂಟಾಗುತ್ತಿದೆ ನನಗೆ. ಅಥವಾ ಇಂದ್ರಪ್ರಸ್ಥದಲ್ಲಿ ಯಾರೂ ಇವರಿಗೆ ಬುದ್ಧಿ ಹೇಳುವವರಿಲ್ಲವೆಂದು ತೋರುತ್ತದೆ. (ಕೃಷ್ಣನನ್ನುದ್ದೇಶಿಸಿ) ಏ ಕೃಷ್ಣ, ಏನು? ಯುದ್ಧಕ್ಕೆ ಸಿದ್ಧನಾಗಬೇಕೆ? ಕದನವೆಂದರೆ ಕೊಳಲಗಾನದಿಂದ ಪಶು ಸಮೂಹವನ್ನು ಆಡಿಸಿದಂತೆ ಎಂದು ತಿಳಿದೆಯಾ? ಅಥವಾ ಸೂಳೆಯರ ಆಟಕೂಟವೆಂದು ಬಗೆದೆಯಾ? ಬಾಣದ ಪೆಟ್ಟಿನ ಗುಟ್ಟನ್ನು ನೀನೇನರಿತಿರುವಿಯೋ? ಹುಲಿಯ ಬಾಯಿಗೆ ಪಶುಗಳು ಬಿದ್ದು ಸಾಯುವಂತೆ ನೀವೇಕೆ ಸಾಯುವಿರಿ?

ಶ್ರೀಕೃಷ್ಣ: ಮಾಗಧ, ಅದೇನು ನಮ್ಮ ಪರಿಚಯ ತಿಳಿದೊಡನೆ ಬಾಯಿಗೆ ಬಂದಂತೆ ಏಕೆ ಒದರಲಾರಂಭಿಸಿದೆ? ಕಾರಣ ತಿಳಿಯಿತು. ರಾತ್ರೆ

ಯಿಡೀ ನಿದ್ರೆಬಿಟ್ಟುದರ ಪರಿಣಾಮವಾಗಿ ಉಂಟಾದ ಪಿತ್ಥದ ಪ್ರಕೋಪ, ಹೊಟ್ಟೆ ತುಂಬಾ ಸೇವಿಸಿದ ಮದ್ಯದ ಪ್ರಭಾವ, ಭಂಗಿ ಸೇವನೆಯ ಪರಿಣಾಮ. ಆದರೆ ಇಷ್ಟೆಲ್ಲಾ ಅವತಾರದ ಅಗತ್ಯವಿಲ್ಲ. ನೀನೊಬ್ಬ ಶೂರನಾದರೆ ಯುದ್ಧಕ್ಕೆ ಸಿದ್ಧತೆಗಳನ್ನೆಸಗು.

ಜರಾಸಂಧ: ಕೃಷ್ಣ, ನಾನು ಕದನಕ್ಕೆ ಹೆದರಿದೆಯೆಂದು ತಿಳಿದೆಯಾ? ಅದು ನಿನ್ನ ಬುದ್ಧಿಯ ದೋಷ. ನೀನು ಕೊಂದಿರುವ ಕಂಸನಿಗೆ ನಿನ್ನ ತಲೆಯ ರಕ್ತದಿಂದ ಈ ಮೊದಲೆ ತರ್ಪಣವನ್ನು ಕೊಡಬೇಕೆಂದು ಬಯಸಿದ್ದೆ. ಚೆನ್ನಾಯಿತು ನೀವು ಬಂದುದು. ಏ ಕಳ್ಳ, ನಿನಗೇಕೊ ರಣದ ವಿಚಾರ? ನೀವು ಲಜ್ಜೆ ಕೆಟ್ಟವರೆಂದಾದ ಮೇಲೆ ನಿಮಗೆ ಗೆದ್ದರೇನು? ಸೋತರೇನು? ನೀನು ಬಂದುದು ನನಗೆ ಆಶ್ಚರ್ಯವಲ್ಲ. ಭೀಮಾರ್ಜುನರೇ, ರಾಜಪುತ್ರರಾದ ನೀವೇಕೆ ಈ ನಾಚಿಕೆ ಕೆಟ್ಟವನೊಂದಿಗೆ ಸೇರಿಕೊಂಡು ಹಾಳಾಗುವಿರಿ? ನಿಮಗೆ ಹೊಸತಾಗಿ ದೊರಕಿದ ನಿಮ್ಮ ರಾಜ್ಯವನ್ನು ಸರಿಯಾಗಿ ನೋಡಿಕೊಳ್ಳುವುದನ್ನು ಬಿಟ್ಟು ಈತನೊಂದಿಗೆ ಊರೂರು ಅಲೆಯಲು ಏಕೆ ಹೊರಟಿರಿ? ನೀವು ಬಂದ ಹಾಗೇ ಹಿಂದೆ ಹೋಗಿ. ಇವನನ್ನು ಮಾತ್ರ ಆ ರಾಜಕುಮಾರರ ಸಂಗಡ ಸೆರೆಮನೆಗೆ ಕಳುಹಿಸುವೆನು. ತಿಳಿಯಿತೆ?

ಭೀಮ: (ಕೋಪದಿಂದ) ಏ ಜರಾಸಂಧ, ಸಾಕು ಮಾಡು ಜಂಭದ ನುಡಿಗಳನ್ನು! ಕೃಷ್ಣನು ನಾಚಿಕೆಯಿಲ್ಲದವನು, ಆತನು ಬಲಹೀನ, ಆತನು ಹಾದಿ ತಪ್ಪಿ ನಡೆಯುವವನು, ಎಂದೆಲ್ಲಾ ಬಾಯಿ ಮಾತಿನ ಬಾಣಗಳನ್ನೇಕೆ ಎಸೆಯುವೆ? ಅರೆನಿಮಿಷದಲ್ಲಿ ನಿನ್ನನ್ನು ವಧಿಸಲಿಕ್ಕಿರುವೆನು. ಬಾ, ಯುದ್ಧಕ್ಕೆ!

ಜರಾಸಂಧ: ಭೀಮ, ನಿನಗೆ ಹೆದರಿದೆಯೆಂದು ಭಾವಿಸದಿರು. ನನ್ನನ್ನು ಕೊಲ್ಲುವವನು ನೀನೇ? ಹೂಂ.... ನೀವು ಮೂವರೂ ಯುದ್ಧಕ್ಕೆ ಬನ್ನಿ. ನಿಮಗೆಲ್ಲರಿಗೂ ಆಯುಧಗಳು ಬೇಕೇ? ಹೆದರಬೇಡಿ. ಅದನ್ನೂ ನಾನೇ ಒದಗಿಸುತ್ತೇನೆ. ಸಿದ್ಧರಾಗಿ.

ಭೀಮ: ಮೂವರೇಕೆ? ನಿನಗೆ ಸಾಧ್ಯವಿದ್ದರೆ ಒಬ್ಬನೊಡನೆ ಸೆಣಸಾಡಿ ನೋಡು. ಯಾರಾಗಬಹುದು? ಈ ಮೊದಲೇ ಅನೇಕ ರಾಕ್ಷಸರನ್ನು ಮಡುಹಿದ ಮಾಧವನೋ? ನಾನೋ? ಅಥವಾ ನನ್ನ ಸಹೋದರನಾದ ಈ ಅರ್ಜುನನೋ? ಯಾರು ಹೇಳು!

ಜರಾಸಂಧ: ಕೃಷ್ಣನು ಯುದ್ಧರಂಗದಿಂದ ಪಲಾಯನ ಮಾಡುವುದರಲ್ಲಿ ಪರಾಕ್ರಮಿಯು! ಅರ್ಜುನನು ಎಷ್ಟಿದ್ದರೂ ಹುಡುಗನು. ಎಲ್ಲಿಯಾದರೂ ಸ್ವಲ್ಪ ಕಾಲ ಕಾದಾಟ ಮಾಡಲು ಸಮರ್ಥನಾಗಿದ್ದರೆ ನೀನೊಬ್ಬನೇ. ಸಿದ್ಧನಾಗಯ್ಯ. ನಿನಗೆ ಬೇಕಾದ ಸಕಲ ಸಾಮಾಗ್ರಿಗಳನ್ನು ಒದಗಿಸುವಂತೆ ಆಜ್ಞೆಯೀಯುತ್ತೇನೆ. ಸಿದ್ಧನಾಗು.

(ಎಲ್ಲರೂ ಹೊರಡುವರು. ಥರದೆ ಬೀಳುವುದು.)

## ದೃಶ್ಯ ೭.

(ಬೀದಿ; ಭೀಮ, ಕೃಷ್ಣ, ಅರ್ಜುನರು ಪ್ರವೇಶಿಸುವರು.)

ಶ್ರೀಕೃಷ್ಣ: ಭೀಮಾರ್ಜುನರೇ, ಹೇಗಿದ್ದರೂ ನಿಮ್ಮ ರಾಜಸೂಯಾಧ್ವರಕ್ಕಿದ್ದ ಒಂದು ದೊಡ್ಡ ಕಂಠಕವಿಂದಿಗೆ ಪರಿಹಾರವಾಯ್ತು. ಭೀಮನಂತೂ ತುಂಬಾ ದಣಿದಿರುವನು. ಈ ಒಂದು ಮಾಗಧ ವಧೆಯಿಂದಾಗಿ ಸಾಮಾನ್ಯ ಎಲ್ಲ ಅರಸರ ನೆರವು ನಮಗಿನ್ನು ದೊರಕಿದಂತೆಯೇ ಎಂದು ನಂಬಿರಿ. ಆತನು ಮಡಿದೊಡನೆ ಆಳುತ್ತಾ ಆಗಮಿಸಿದ್ದ ಅವನ ಮಡದಿಯರಾದ ಚಿತ್ರವಿಚಿತ್ರೆಯರನ್ನು ಸಂತೈಸಲು ತುಂಬಾ ಕಷ್ಟ ಪಡಬೇಕಾಯಿತು. ಸೆರೆಯಲ್ಲಿದ್ದ ರಾಜಕುಮಾರರನ್ನೆಲ್ಲ ಬಿಡುಗಡೆ ಮಾಡಿದುದರಿಂದ ಇನ್ನು ಕೆಲವೇ ಸಮಯದಲ್ಲಿ ಯಜ್ಞಪಶುಗಳಾಗುತ್ತಿದ್ದವರು ಹೇಗೂ ಬದುಕಿಕೊಂಡರು. ಅಲ್ಲದೆ ಆತನ ಮಗನಾದ ಸಹದೇವನಿಗೇ ಪಟ್ಟಾಭಿಷೇಕದ ಏರ್ಪಾಡುಗಳೂ ನಡೆದವಷ್ಟೆ. ಇನ್ನೂ ತಡಮಾಡಲೆಡೆಯಿಲ್ಲ. ಧರ್ಮಜನು ಕುತೂಹಲದಿಂದಲೂ, ಬೆದರಿಕೆಯಿಂದಲೂ ನಮ್ಮನ್ನು ಕಾಯುತ್ತಿರಬಹುದು. ಆದಷ್ಟು ಬೇಗನೆ ಇಂದ್ರಪ್ರಸ್ಥಕ್ಕೆ ತೆರಳುವಾ.

ಭೀಮ: ಭಗವಾನ್, ನೀನು ನಮ್ಮೊಂದಿಗೆ ಇರದಿರುತ್ತಿದ್ದರೆ ಅಷ್ಟು ಬೇಗನೆ ಕಾರ್ಯವು ಅಂತ್ಯವಾಗುತ್ತಿದ್ದಿಲ್ಲ. ಕಾಲು ಹಿಡಿದು ಎರಡು ಹೋಳಾಗಿ ಮಾಡಿ ಆತನನ್ನು ಬಿಸಾಡಿದರೂ ಹೋಳುಗಳು ಒಂದಾಗಿ ಕದನಕ್ಕೆ ಬರುತ್ತಿದ್ದ ದೃಶ್ಯವನ್ನು ಎಣಿಸುವಾಗಲೇ ಸ್ವಲ್ಪ ಬೆದರಿಕೆಯಾಗುತ್ತಿದೆ. ಸ್ವಾಮಿ, ಸಮಯಕ್ಕೆ ಸರಿಯಾದ ನಿನ್ನ ಸೂಚನೆಯಿಂದಾಗಿ ನಾವು ಜಯಶಾಲಿಗಳಾದೆವು. ಎಲ್ಲವೂ ನಿನ್ನ ಲೀಲೆ ಭಗವಾನ್. ("ಜನಗಣಮನ" ಗೀತವಾಗುತ್ತಿದ್ದಂತೆ ಅಂಕಥರದೆ ಮೆಲ್ಲನೆ ಬೀಳುವುದು.)

೩೪. ಅಳುವಿನ ಹೊಳೆ ಮತ್ತು ಕೇಶವಭೂಪ [ಮಕ್ಕಳ ಕಥೆಗಳು] "ನವಗಿರಿನಂದ."
೩೫. ಶರಾಬಿನ ಸಿಪಾಯಿಗಳು ಶ್ರೀ। ಬಳ್ಳೂರು ಸುಬ್ರಾಯ ಅಡಿಗ.
೩೬. ಗುಮಾನಿಕವಿಯ ಉಪದೇಶ ಶತಕ ಶ್ರೀ। ಅಮ್ಮೆಂಬಳ ಅನಂತಯ್ಯ ನಾವಡ.
೩೭. ನಿಮಗೆ ಗೊತ್ತಿದೆಯೇ? ಶ್ರೀ। ಟಿ. ಚಂದ್ರರಾಜ ಸೆಟ್ಟಿ.
೩೮. ಚತುರ ಚಮತ್ಕಾರ ಡಾ। ಎಸ್. ಪಿ. ಭಟ್.
೩೯. ಸತೀ ಸಾವಿತ್ರಿ [ಏಕಾಂಕ ನಾಟಕ] ಶ್ರೀ। ಪಿ. ವೆಂಕಟರಮಣ ಭಟ್ಟ.
೪೦. ಆಭರಣಗಳ ಪೆಟ್ಟಿಗೆ ಮತ್ತು ಇತರ ಕಥೆಗಳು. ಶ್ರೀ। ಬಳ್ಳೂರು ಸುಬ್ರಾಯ ಅಡಿಗ.
೪೧. ಭಾರತದ ಮಂತ್ರಿಮಂಡಲಗಳು. (ದ್ವಿತೀಯ ಮುದ್ರಣ.)
೪೨. ಕಾಲುಬಳೆಯ ಕತೆ ಶ್ರೀಮತಿ ಬಿ. ಎಸ್. ರತ್ನಮ್ಮ.
೪೩. ಭಾರತದ ನಾಲ್ಕು ಕಲಶಗಳು ಶ್ರೀ। ಟಿ. ಚಂದ್ರರಾಜ ಸೆಟ್ಟಿ.
೪೪. ವ್ಯಸನದಿಂದ ಲಾಭ ಮತ್ತು ಇತರ ಕಥೆಗಳು ಶ್ರೀ। ಎಲ್. ಎಸ್. ನಾಯಕ.
೪೫. ಸುಭಾಷಿತ (ನೀತಿವಚನಗಳು) ಶ್ರೀ। ಎಂ. ಸುಬ್ರಾಯನ್, ವಿದ್ವಾನ್.
೪೬. ಗಲಜಿರ "ಸಿಪಾಯಿದಂಗೆ" ಶ್ರೀ। ಸುಭಾಷ್ಚಂದ್ರ ಶೆಣೈ, ಬದಿಯಡ್ಕ.
೪೭. ಅಕಾಂಡತಾಂಡವ (ರೇಡಿಯೋ ನಾಟಕ) ಶ್ರೀ। ಬಿ. ದಾಮೋದರ ಬಾಳಿಗ, ಬಿ.ಎ.
೪೮. ಸಾಹಸದ ಕಥೆಗಳು ಶ್ರೀ। ಕುಡ್ಪಿ ವಾಸುದೇವ ಶೆಣೈ.
೪೯. ಸಂಜ್ಞಾ ಜ್ಞಾನಕೋಶ (ಪ್ರಥಮ ಭಾಗ) ಡಾ। ಎಸ್. ಪಿ. ಭಟ್.
೫೦. ಪಂಡಿತನ ಪಿಟಿಲು ಶ್ರೀ। ಕುಡ್ಪಿ ವಾಸುದೇವ ಶೆಣೈ.
೫೧. ಭೋಗಯಾತ್ರೆ (ಆಚಾರ್ಯ ವಿನೋಬಾಭಾವೆ) ಶ್ರೀ। ಎಲ್. ಎಸ್. ನಾಯಕ.
೫೨. ಸಂಗ್ರಾಮಸಿಂಹ (ಐತಿಹಾಸಿಕ ಕಥನ) ಶ್ರೀ। ಅ. ಗೌ. ಕಿನ್ನಿಗೋಳಿ ವಿದ್ವಾನ್.
೫೩. ಧರ್ಮ ಶಿಕ್ಷಾ ಶ್ರೀ। ಕೋ. ಶ. ಕಾರಂತ, ಬಿ.ಎ., ಬಿ.ಎಲ್., ಎಡ್ವೊಕೇಟ್
೫೪. ಮಹಾತ್ಮ (ಪೂಜ್ಯ ಬಾಪೂಜಿ) ಶ್ರೀ। ಎಲ್. ಎಸ್. ನಾಯಕ್.
೫೫. ಮೀರಾಬಾಯಿ (ಏಕಾಂಕ ನಾಟಕ) ಶ್ರೀ। ಸಂ. ಜ. ರಾವ್.
೫೬. ವೀರರಮಣಿ ಕರ್ಮದೇವಿ ಶ್ರೀ। ಕೆ. ಎಸ್. ಶರ್ಮಾ, ವಿದ್ವಾನ್.
೫೭. ಅರಳಿದ ನಗು ಶ್ರೀ। ಬಳ್ಳೂರು ಸುಬ್ರಾಯ ಅಡಿಗ, ವಿದ್ವಾನ್.
೫೮. ಸಚಿತ್ರ ಜಪಾನ್ ಶ್ರೀ। ಟಿ. ರಮೇಶ ಪೈ.
೫೯. ಚುಟ್ಟಬಿಟ್ಟದಿಟ್ಟ ಡಾ। ಎಸ್. ಪಿ. ಭಟ್.
೬೦. ನಿರಪರಾಧಿ ಶ್ರೀ। ಎಲ್. ಎಸ್. ನಾಯಕ್.
೬೧. ಭಕ್ತವಾಣಿ ರಾಷ್ಟ್ರಕವಿ ಮಂಜೇಶ್ವರ ಗೋವಿಂದ ಪೈ.
೬೨. ಜಾನಪದ ಸಾಹಿತ್ಯ ಶ್ರೀ। ಪಡಾರು ಮಹಾಬಲೇಶ್ವರ ಭಟ್.
೬೩. ಡಾಕ್ಟರ್ ಅರೋಗ್ಯಮ್ ಶ್ರೀ। ಕೆ. ಎನ್. ಭಟ್, ಶಿರಾಡಿಪಾಲ್.
೬೪. ಲೌಕಿಕ ನ್ಯಾಯಗಳು ಶ್ರೀ। ಕೆ. ಎಲ್. ಎನ್. ಉಪಾಧ್ಯಾಯ.
೬೫. ಶಿಶುಪಾಲ ಮಾನಭಂಗ ಶ್ರೀ। ಕೆ. ಸುಭಾಷಚಂದ್ರ ಶೆಣೈ, ಬದಿಯಡ್ಕ.
೬೬. ಜರಾಸಂಧ ವಧೆ ಶ್ರೀ। ಕೆ. ವಿ. ಮಯ್ಯ, ಬಂಟ್ವಾಳ.

‡ಈ ಗುರುತು ಹಾಕಿದ ಪುಸ್ತಕಗಳ ಪ್ರತಿಗಳು ಮುಗಿದಿವೆ.

ಈ ವರೆಗೆ ಅರ್ವತ್ತಆರು ಪುಸ್ತಕಗಳಲ್ಲಿ, ಅರ್ವತ್ತಆರು ಆಣೆಗಳಿಗೆ,
'ಒಂದಾಣೆ ಮಾಲೆ'ಯು, ಹೊದಿಕೆ ಕೂಡಿ, 1436 ಪುಟಗಳನ್ನು ಕೊಟ್ಟಿರುತ್ತದೆ.

ಒಂದಾಣೆಮಾಲೆ, ಪ್ರಭಾತ ಆಫೀಸು, ರಥಬೀದಿ, ಮಂಗಳೂರು.

## ಒಂದಾಣೆ ಮಾಲೆಯಲ್ಲಿ ವಿದ್ಯಾರ್ಥಿಗಳಿಗೆ ಅತ್ಯುಪಯುಕ್ತವಿರುವ ಪುಸ್ತಕಗಳೇ ಪ್ರಕಟವಾಗುವುವು.

- ಒಗಟುಗಳ ಎರಡು ಪ್ರಕಟಣೆಗಳು
- ಸಂಜ್ಞಾ ಜ್ಞಾನಕೋಶ
- ಭಾರತದ ಮಹಾನಗರಗಳು
- ಚತುರ ಚಮತ್ಕಾರ
- ಭಾರತದ ಮಂತ್ರಿಮಂಡಲಗಳು
- ಭಾರತದ ನಾಲ್ಕು ಕಲಶಗಳು
- ಸಚಿತ್ರ ಜಪಾನ್
- ಲೌಕಿಕ ನ್ಯಾಯಗಳು

—ಇವೇ ಮೊದಲಾದುವಲ್ಲದೆ,
ಆರಿಸಿ ತೆಗೆದ ಬೋಧಪ್ರದ ಕಥಾಸಂಗ್ರಹಗಳಿವೆ;
ರಾಜಾಜಿಯವರ ಎರಡು ಕಥೆಗಳು ಪ್ರಕಟವಾಗಿವೆ.



ಶಾಲಾ-ಕೊಲೇಜುಗಳ ವಿಶೇಷ ಸಮಾರಂಭಗಳಲ್ಲಿ ಅಭಿನಯಿಸ ಬರುವ ಉತ್ತಮ ಏಕಾಂಕ ನಾಟಕಗಳು ಪ್ರಕಟವಾಗಿವೆ.



ಪ್ರತಿ ವಾರವೂ ತಪ್ಪದೆ 'ಒಂದಾಣೆ ಮಾಲೆ' ಪುಸ್ತಕಗಳನ್ನು ಕೊಂಡುಕೊಳ್ಳಿರಿ.

Edited, Printed and Published by K. V. Shenoy
at The Prabhat Printers, Ltd., Mangalore-1.